# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 331(275)
2. ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಶ್ರೀ ಅರವಿಂದ ಕುಮಾರ್ ಅರಳಿ
3. ಉತ್ತರಿಸಬೇಕಾದ ದಿನಾಂಕ : 17.07.2019
4. ಉತ್ತರಿಸಬೇಕಾದ ಸಚಿವರು : ಮಾನ್ಯ ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಸಚಿವರು.

| ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| (ಅ) | ಹುಮನಾಬಾದ್ ಕೈಗಾರಿಕಾ ಪ್ರದೇಶದಿಂದ ಪರಿಸರ ಮಾಲಿನ್ಯವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಹೌದು. |
| (ಆ) | ಕೈಗಾರಿಕಾ ಪ್ರದೇಶದ ಸುತ್ತಲಿನ ಮಾಣಿಕನಗರ, ಗಡವಂತಿ ಮತ್ತಿತರ ಗ್ರಾಮಗಳಲ್ಲಿ ಅಂತರ್ಜಲ ಕಲುಷಿತಗೊಂಡು ಜನರ ಆರೋಗ್ಯದ ಮೇಲೆ ಪರಿಣಾಮ ಬೀರುತ್ತಿರುವುದು ನಿಜವೇ: | ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯ ವತಿಯಿಂದ ಹುಮ್ನಾಬಾದ್ ಕೈಗಾರಿಕಾ ಪ್ರದೇಶ, ಬೀದರ್ ಜಿಲ್ಲೆಯ 10 ಬಾವಿಗಳಲ್ಲಿ ಹಾಗೂ ಗಡವಂತಿ ಗ್ರಾಮದ ಸರ್ಕಾರಿ ಪ್ರಾಥಮಿಕ ಶಾಲೆಯಲ್ಲಿನ ಹಾಗೂ ಶ್ರೀ ಕಂಕಟ್ಟರ್, ಗಂಡವತಿ ಗ್ರಾಮದಲ್ಲಿನ ಕೊಳವೆಬಾವಿಯ ನೀರಿನ ಮಾದರಿಗಳನ್ನು ಹಾಗೂ ರಾಷ್ಟ್ರೀಯ ಹೆದ್ದಾರಿ ಗಂಡವತಿಯಲ್ಲಿ ಇರುವ ತೆರೆದ ಬಾವಿಯ ನೀರಿನ ಮಾದರಿಗಳನ್ನು ಸಂಗ್ರಹಿಸಿ ವಿಶ್ಲೇಷಿಸಲಾಗಿದೆ. ವಿಶ್ಲೇಷಣಾ ವರದಿಯಂತೆ, ಈ ಬಾವಿಗಳಲ್ಲಿನ ನೀರಿನಲ್ಲಿ, ಕ್ಯಾಲ್ಸಿಯಂ, ಮ್ಯಾಗ್ನೀಷಿಯಂ ಹಾಗೂ ಗಡಸುತನವು ಕುಡಿಯುವ ನೀರಿಗೆ ಭಾರತ ಮಾನಕ ಬ್ಯೂರೊ (BIS) ಸಂಸ್ಥೆಯು ನಿಗದಿಪಡಿಸಿದ ಗುಣಮಟ್ಟಕ್ಕಿಂತ ಹೆಚ್ಚಾಗಿರುವುದು ಕಂಡು ಬಂದಿರುತ್ತದೆ. ಈ ಪ್ಯಾರಾ ಮೀಟರ್ (Parameter)ನ ಹೆಚ್ಚಳವು ಹುಮ್ನಾಬಾದ್ ಕೈಗಾರಿಕಾ ಪ್ರದೇಶದಲ್ಲಿರುವ ಕೈಗಾರಿಕೆಗಳ ತ್ಯಾಜ್ಯ ನೀರಿನಿಂದಲೇ ಆಗಿರುವುದೆಂದು ತೀರ್ಮಾನಿಸಲು ಆಗುವುದಿಲ್ಲ. |
| (ಇ) | ಹಾಗಿದ್ದಲ್ಲಿ, ಪರಿಸರ ಮತ್ತು ಜಲ ಮಾಲಿನ್ಯವನ್ನು ತಡೆಯಲು ಸರ್ಕಾರವು ಕೈಗೊಂಡ ಕ್ರಮಗಳೇನು? | ಬೀದರ್ ಜಿಲ್ಲೆಯ ಹುಮ್ನಾಬಾದ್ ಪ್ರದೇಶದಲ್ಲಿ ಒಟ್ಟು 34 ಕೈಗಾರಿಕೆಗಳು ಕಾರ್ಯಚರಣೆಯಲ್ಲಿದ್ದು ಅವುಗಳಲ್ಲಿ ಪ್ರಮುಖವಾಗಿ ಬಲ್ಕ್ ಡ್ರಗ್ಸ್ ಹಾಗೂ ಔಷಧಿ ತಯಾರಿಕೆ ಮಾಡುವ 7 ಕೈಗಾರಿಕೆಗಳು, 4 ಟೈರ್ ಪೈರೋಲಿಸಿಸ್ ಘಟಕಗಳು, 4 ಫುಲ್ಲರ್ಸ್ ಅರ್ತ್ ಘಟಕಗಳು, 6 ಪ್ಲಾಸ್ಟಿಕ್ ವಸ್ತುಗಳ ತಯಾರಿಕಾ ಘಟಕಗಳು ಹಾಗೂ ಇತರೆ ಸಣ್ಣ |

| | | |
|---|---|---|
| | | ಪ್ರಮಾಣದ ಕೈಗಾರಿಕೆಗಳು ಇರುತ್ತವೆ. ಬಲ್ಕ್ ಡ್ರಗ್ಸ್ ಹಾಗೂ ಔಷಧಿ ತಯಾರಿಕಾ ಘಟಕಗಳಿಂದ ಉತ್ಪತ್ತಿಯಾಗುವ ತ್ಯಾಜ್ಯ ನೀರನ್ನು ಸಂಸ್ಕರಿಸಿ ಸಂಪೂರ್ಣ ಮರುಬಳಕೆ ಮಾಡಲು ಮಲ್ಟಿಪಲ್ ಎವಾಪರೇಟರ್‌ಗಳನ್ನು ಉದ್ದಿಮೆಗಳು ಅಳವಡಿಸಿರುತ್ತಾರೆ.<br><br>ಮಾಲಿನ್ಯಕಾರಕ ಕೈಗಾರಿಕೆಗಳನ್ನು ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯ ವತಿಯಿಂದ ಕಾಲಕಾಲಕ್ಕೆ ಪ್ರಾದೇಶಿಕ ಅಧಿಕಾರಿಯಿಂದ ತಪಾಸಣೆ ನಡೆಸಿ ಸದರಿ ಕೈಗಾರಿಕೆಗಳು ಜಲ ಮತ್ತು ವಾಯು ಮಾಲಿನ್ಯ ತಡೆಗಟ್ಟಲು ಮಂಡಳಿಯು ವಿಧಿಸಿದ ನಿಬಂಧನೆಗಳನ್ನು ಪಾಲಿಸುತ್ತಿರುವ ಬಗ್ಗೆ ಪರಿವೀಕ್ಷಣೆ ನಡೆಸಿ ಉಲ್ಲಂಘನೆಗಳನ್ನು ಗಮನಿಸಿದಲ್ಲಿ ಕೈಗಾರಿಕೆಗಳ ವಿರುದ್ಧ ಜಲ ಕಾಯ್ದೆ ಹಾಗೂ ವಾಯು ಕಾಯ್ದೆಗಳನ್ವಯ ಕ್ರಮ ಜರುಗಿಸಲಾಗುತ್ತಿದೆ.<br><br>ಸದರಿ ಕೈಗಾರಿಕಾ ಪ್ರದೇಶದಲ್ಲಿರುವ ಕೆಳಕಂಡ ತಪ್ಪಿತಸ್ಥ ಉದ್ದಿಮೆಗಳ ಮೇಲೆ ಜಲ ಕಾಯ್ದೆಯ ಕಲಂ 33(ಎ) ಹಾಗೂ ವಾಯು ಕಾಯ್ದೆಯ ಕಲಂ 31(ಎ) ಅಡಿಯಲ್ಲಿ ಮುಚ್ಚುವ ಆದೇಶಗಳನ್ನು ಮಂಡಳಿಯಿಂದ ಜಾರಿ ಮಾಡಲಾಗಿದೆ.<br>1. ಮೆ. ಸ್ಟಾರ್ ಸೋಪ್ ಇಂಡಸ್ಟ್ರೀಸ್,<br>2. ಮೆ. ವೆಂಕಟಸಾಯಿ ಆರ್ಗಾನಿಕ್,<br>3. ಮೆ. ಜಿಪಿಆರ್ ಲೈಫ್ ಸೈನ್ಸಸ್. |

ಸಂಖ್ಯೆ: ಅಪಜೀ 29 ಇಪಿಸಿ 2019
(e-office file)

**(ಸತೀಶ್ ಜಾರಕಿಹೊಳಿ)**
ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಸಚಿವರು.